CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ನವೆಂಬರ್ ೧೭, ೨೦೦೫ (ಕಾರ್ತಿಕ ೨೬, ಶಕ ವರ್ಷ ೧೯೨೭) | ಸಂಚಿಕೆ ೪೫ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ. ರಾಧಾಕೃಷ್ಣ ಹೊಳ್ಳ, 1ನೇ ಅಪರ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಕೋಲಾರ, ಇವರ ಸೇವೆಯನ್ನು 60 ವರ್ಷಗಳವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಜಿ ಓ ಬಿ (1) 338:2004, ದಿನಾಂಕ:2.9.2005.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರ ಸೇವೆಯನ್ನು 58 ವರ್ಷ ನಂತರವೂ ಮುಂದುವರೆಸುವ ಬಗ್ಗೆ ಉಚ್ಚ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷದ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 95 (ಎ)ರ ಅನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳವರೆಗೆ ಮುಂದುವರೆಸಬಹುದಾಗಿದೆ. ಅದರಂತೆ ಶ್ರೀ ಕೆ. ರಾಧಾಕೃಷ್ಣ ಹೊಳ್ಳ, 1ನೇ ಅಪರ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಕೋಲಾರ, ಇವರ ಗೌಪ್ಯ ವರದಿ, ಇವರು ನಿರ್ವಹಿಸಿದ ಕಾರ್ಯದಕ್ಷತೆ ಇವರ ಉಪಯುಕ್ತ ಸೇವಾ ಸಮರ್ಥತೆಗಳನ್ನು ಪರಿಗಣಿಸಿ ಇವರನ್ನು 58 ವರ್ಷಗಳ ನಂತರ ಅಂದರೆ 60 ವರ್ಷಗಳವರೆಗೆ ಸೇವೆಯಲ್ಲಿ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 30.8.2005 ರಂದು ತೀರ್ಮಾನಿಸಿದ್ದು, ಮೇಲೆ ಓದಲಾದ ಪತ್ರ ದಿನಾಂಕ: 2.9.2005 ರಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರು ಶ್ರೀ ಕೆ. ರಾಧಾಕೃಷ್ಣ ಹೊಳ್ಳ, 1ನೇ ಅಪರ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಕೋಲಾರ, ಇವರ ಸೇವೆಯನ್ನು 58 ವರ್ಷಗಳ ನಂತರ 60 ವರ್ಷದವರೆಗೆ ಸೇವೆಯಲ್ಲಿ ಮುಂದುವರೆಸಲು ಸರ್ಕಾರದ ಆದೇಶ ಕೋರಿರುತ್ತಾರೆ. ಪ್ರಸ್ತುತ ಅಧಿಕಾರಿಯ ಜನ್ಮ ದಿನಾಂಕವು 9.10.1947 ಆಗಿದ್ದು ಇವರು ದಿನಾಂಕ 31.10.2005 ರಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 112 ಸೇಉನ್ಯಾ 2005, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ. ರಾಧಾಕೃಷ್ಣ ಹೊಳ್ಳ, 1ನೇ ಅಪರ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಕೋಲಾರ ಇವರು ದಿನಾಂಕ: 31.10.2005 ರಂದು 58 ವರ್ಷಗಳ ವಯೋಮಿತಿ ಪೂರೈಸಿದ ನಂತರವೂ ಇವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ) ರನ್ವಯ 60 ವರ್ಷಗಳ ವಯೋಮಿತಿ ವರೆಗೆ ಸೇವೆಯಲ್ಲಿ ಮುಂದುವರೆಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 1491

### ಶಿಕ್ಷಣ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆ ಮುಧೋಳ ಪಟ್ಟಣದಲ್ಲಿ ಕವಿರನ್ನ ವಸತಿ ಶಾಲೆಗೆ ವಸತಿ ಗೃಹ ನಿರ್ಮಾಣದ ಕಾಮಗಾರಿಯನ್ನು ಪೂರ್ಣಗೊಳಿಸಲು ಬಾಕಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಇಡಿ 242 ಯೋಯೋಕಾ 2004 ದಿನಾಂಕ: 22.1.2005.

2. ಸರ್ಕಾರದ ಆದೇಶ ಸಂಖ್ಯೆ:ಇಡಿ 242 ಯೋಯೋಕಾ 2004 ದಿನಾಂಕ: 28.2.2005.
3. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಬಾಗಲಕೋಟೆ ಇವರ ಪತ್ರ ಸಂಖ್ಯೆ: ಜಿಸಂಬಾ/ಲೆಶಾ/ಮು.ಲೆ.ಅ/ಕ.ರ.ವ.ಶಾ/ಅನುದಾನ/2005-06 ದಿನಾಂಕ: 23.5.2005.

**ಪ್ರಸ್ತಾವನೆ:**

ಮೇಲೆ (i)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2004-05ನೇ ಸಾಲಿನಲ್ಲಿ ರನ್ನ ಸ್ಮಾರಕ ವಸತಿ ಶಾಲೆಯ ಕಟ್ಟಡ ಕಾಮಗಾರಿಯನ್ನು ಲೆಕ್ಕ ಶೀರ್ಷಿಕೆ 2202-02-800-9-01ರಡಿ ನಿಗದಿಯಾಗಿರುವ ರೂ.50.00 ಲಕ್ಷಗಳ (ರೂ. ಐವತ್ತು ಲಕ್ಷಗಳು) ಮಿತಿಯೊಳಗೆ ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಲು ಕವಿರನ್ನ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ರೂ. 16.14 ಲಕ್ಷಗಳನ್ನು (ರೂ. ಹದಿನಾರು ಲಕ್ಷ ಹದಿನಾಲ್ಕು ಸಾವಿರಗಳು) ಬಿಡುಗಡೆ ಮಾಡಿ ಸದರಿ ಮೊತ್ತವನ್ನು ಡ್ರಾ ಮಾಡುವ ಅಧಿಕಾರವನ್ನು ಬಾಗಲಕೋಟೆ ಜಿಲ್ಲಾ ಪಂಚಾಯತ್‌ನ ಮುಖ್ಯಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪರಿಷ್ಕರಿಸಲಾದ ಆದೇಶ ಹೊರಡಿಸಲಾಗಿರುತ್ತದೆ. ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ದಿನಾಂಕ 14.2.2005ರ ಪತ್ರದಲ್ಲಿ ನಿವಾಸಿ ಪ್ರೌಢಶಾಲೆಗಳು ಲೆಕ್ಕ ಶೀರ್ಷಿಕೆ 2202-02-800-9-01-101ರಲ್ಲಿ ರೂ. 50.00 ಲಕ್ಷಗಳ ಆಯವ್ಯಯ ಒದಗಿಸಲಾಗಿದ್ದು ಈ ಮೊತ್ತದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಇವರ ವಿಲೇವಾರಿಯಲ್ಲಿ ರೂ. 42.00 ಲಕ್ಷಗಳನ್ನು ಅನುದಾನಿತ ಬಿಲ್ಲುಗಳಿಗೆ ಆನ್‌ಲೈನ್ ಗಣಕೀಕರಣ ಮಾಡಿಸಿಕೊಂಡಿದ್ದು ಸದರಿ ಲೆಕ್ಕ ಶೀರ್ಷಿಕೆಯಡಿ ರೂ. 8.00 ಲಕ್ಷ ಮಾತ್ರ ಬಾಕಿ ಉಳಿದಿದ್ದು ಈ ಮೊತ್ತವನ್ನು ಮಾತ್ರ ಬಿಡುಗಡೆಗೊಳಿಸುವಂತೆ ಕೋರಲಾಗಿದ್ದು ಅದರಂತೆ ಪರಿಷ್ಕರಿಸಿ ಆದೇಶವನ್ನು ಹೊರಡಿಸಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 23.5.2005ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರು ವರದಿ ಮಾಡಿ ಪರಿಷ್ಕರಿಸಿ ಹೊರಡಿಸಲಾದ ಆದೇಶದಂತೆ ಕವಿರನ್ನ ಸ್ಮಾರಕ ಸರ್ಕಾರಿ ವಸತಿ ಶಾಲಾ ಕಟ್ಟಡ ನಿರ್ಮಾಣಕ್ಕೆ ರೂ. 8.00 ಲಕ್ಷ ಮಾತ್ರ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಎಂದು ಇನ್ನು ಜಿಲ್ಲೆಯಲ್ಲಿ ಕಾಮಗಾರಿಯ ಅನುದಾನ ರೂ. 8.14 ಲಕ್ಷಗಳ ಬಿಲ್ಲುಗಳು ಬಾಕಿ ಇರುತ್ತದೆ ಎಂದು ತಿಳಿಸುತ್ತಾ ಈ ಅನುದಾನವನ್ನು ತುರ್ತಾಗಿ ಪರಿಗಣಿಸಿ ಬಾಕಿ ಅನುದಾನವನ್ನು ಕೂಡಲೇ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 196 ಯೋಯೋಕಾ 2005, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2005**

**(ಇಡಿ 48 ಸ್ಕೀಮರ (ಯೂನಿಕ್) 2005, ದಿನಾಂಕ: 6ನೇ ಅಕ್ಟೋಬರ್ 2005)**

ಬಾಗಲಕೋಟೆ ಜಿಲ್ಲೆ ಮುಧೋಳದಲ್ಲಿ ನಡೆಯುತ್ತಿರುವ ಕವಿರನ್ನ ಸ್ಮಾರಕ ಸರ್ಕಾರಿ ವಸತಿ ಶಾಲಾ ಕಟ್ಟಡ ನಿರ್ಮಾಣಕ್ಕೆ 2005-06ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202-02-800-1-05-059 (ಯೋಜನೆ)ರ ಅಡಿ ನಿಗದಿಯಾಗಿರುವ ರೂ. 30.00 ಲಕ್ಷಗಳ ಮಿತಿಯೊಳಗೆ ಬಾಕಿ ಉಳಿದಿರುವ ಮೊತ್ತ ರೂ.8.14 ಲಕ್ಷಗಳನ್ನು (ರೂ. ಎಂಟು ಲಕ್ಷದ ಹದಿನಾಲ್ಕು ಸಾವಿರಗಳು) ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಲು ಕವಿರನ್ನ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ಬಿಡುಗಡೆ ಮಾಡಲಾಗಿದೆ. ಹಾಗೂ ಸದರಿ ಮೊತ್ತವನ್ನು ಡ್ರಾ ಮಾಡುವ ಅಧಿಕಾರವನ್ನು ಬಾಗಲಕೋಟೆ ಜಿಲ್ಲಾ ಪಂಚಾಯತ್‌ನ ಮುಖ್ಯಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನೀಡಲಾಗಿದೆ. ಹಾಗೂ ಸದರಿ ಲೆಕ್ಕ ಶೀರ್ಷಿಕೆಯು ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿದೆ.

ಕೈಗೆತ್ತಿಕೊಳ್ಳುವ ಕಟ್ಟಡಗಳ ಗುಣಮಟ್ಟ ಸಮರ್ಪಕವಾಗಿರುವ ಬಗ್ಗೆ ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಕಾರ್ಯನಿರ್ವಾಹಣಾಧಿಕಾರಿಗಳು ಹಾಗೂ ಜಿಲ್ಲಾ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ನಿಗಾವಹಿಸತಕ್ಕದ್ದು. ಹಣ ಬಳಕೆ ಪ್ರಮಾಣ ಪತ್ರವನ್ನು ಹಾಗೂ ಭೌತಿಕ ಪ್ರಗತಿಯ ವರದಿಯನ್ನು ತಪ್ಪದೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆಧ್ಯಾದೇಶ 2000 ಮತ್ತು ಅದರಡಿಯಲ್ಲಿನ ನಿಯಮಗಳನ್ನು ಚಾಚೂ ತಪ್ಪದೇ ಕಡ್ಡಾಯವಾಗಿ ಹಾಗೂ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಶಿಕ್ಷಣ ಇಲಾಖೆ ಇವರ ಅ.ಟಿ.ಸಂಖ್ಯೆ: ಶಿಇ 751 ಐಎಫ್(ಬಿಎ) 2005 ದಿನಾಂಕ 27.9.2005 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1493

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

## EDUCATION SECRETARIAT

**Sub:** Setting up of State level Steering and Co-ordination committee for effective implementation of Akshara Dasoha-Mid-day-meal programme in Karnataka.

**Preamble:-**

Ministry of Human Resource Development (Department of Elementary Education and Literacy) Government of India vide their guidelines issued during December 2004 have prescribed among others things the setting up of steering Cum-monitoring Committees at State level to monitor the effective implementation of Mid-day-Meal programme under National Programme of Nutritional Support to Primary Education. The Government of Karnataka after examining this aspect decides to set up State level Committee in Karnataka and issues the following orders.

**Order No. ED 110 mms 2005, Bangalore, Dated 26th September 2005**

Government are pleased to constitute Steering-cum-Monitoring Committee at State level for effective implementation of Midday Meal Scheme under National Programme of Nutritional Support to Primary Education consisting of the following members.

1. Additional Chief Secretary, Chair person.

**Members:**

2. Sri Narasing Rao Suryavamshi, Hon'ble Member of Loksabha, Bidar.
3. Sri N.L. Narendra Babu, MLA, Rajajinagara, Bangalore.
4. Dr. Sharana Harana Prakash Patel, MLA, Sedam, Gulbarga District.
5. Additional Chief Secretary & Principal Secretary to Government, Planning Department.
6. Principal Secretary to Government, Finance Department.
7. Principal Secretary to Government, Health & Family Welfare, Department.
8. Principal Secretary to Government, Food Civil Supplies & Consumer Affairs Department.
9. Principal Secretary to Government, Women & Child Development Department.
10. Principal Secretary to Government, Urban Development Department.
11. Secretary to Government Education Department (Primary & Secondary Education)
12. Secretary to Government, Rural Development and Panchayat Raj Department.
13. Senior Regional Manager, Food Corporation of India, Bangalore.
14. Managing Director, Karnataka Food and Civil Supplies Corporation, Bangalore.
15. Sri Prakash, Director, CFTRI, Mysore.
16. Assistant Technical Adviser, Food and Nutrition Board, Government of India, Kendriya Sadan, Koramangala, Bangalore.
17. Sri Madhu Pandit Dass, ISKON, Bangalore.
18. Sri Appaji Gowda, President, Kannada Kasturi Kala Sangha, Bangalore.
19. Dr: (Smt) Vedha Jakaria, Sanjeevini Trust, Richmond Town, Bangalore.
20. Prof: (Smt) Ramanaik, University of Agricultural Science Dharwad.
21. Chief Executive Officer, Zilla panchayat, Raichur.
22. Chief Executive Officer, Zilla panchayat, Bangalore Rural.
23. Chief Executive Officer, Zilla panchayat, Bagalkote.
24. Chief Executive Officer, Zilla panchayat, Chamarajanagar.
25. Chief Executive Officer, Zilla panchayat, Bangalore Urban District.
26. Sri Eregowda, President, State Primary School teachers Association Bangalore.
27. Commissioner of Public Instruction, Bangalore - Member Secretary.

By Order and in the name of the Governor of Karnataka,

P.R. 1494

**K. SRIKANTESHWARA**

Special Officer & Ex-Officio Joint Secretary to Government (planning)

Education Department.

## ಶಿಕ್ಷಣ ಸಚಿವಾಲಯ

**ವಿಷಯ:** ತಾಂತ್ರಿಕ ಶಿಕ್ಷಣ ಗುಣಮಟ್ಟ ಅಭಿವೃದ್ಧಿ ಯೋಜನೆಯ ರಾಜ್ಯ ಮಟ್ಟದ ಚಾಲನಾ ಸಮಿತಿಯ ತೀರ್ಮಾನಗಳನ್ನು ಸರ್ಕಾರದ ನಿರ್ಣಯಗಳೆಂದೇ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 4 ಟಿಪಿಇ 2002 ದಿನಾಂಕ: 15.3.2004.
2. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: DTE/TEQIP/CR-181/2005-06 ದಿನಾಂಕ: 27.9.2005.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 62 ಆರ್‌ಇಹೆಚ್ 2001 ದಿನಾಂಕ: 25.4.2001.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 15.3.2004ರ ಸರ್ಕಾರಿ ಆದೇಶದಲ್ಲಿ ತಾಂತ್ರಿಕ ಶಿಕ್ಷಣ ಗುಣಮಟ್ಟ ಅಭಿವೃದ್ಧಿ ಯೋಜನೆ ಕುರಿತು ರಾಜ್ಯ ಮಟ್ಟದ ಚಾಲನಾ ಸಮಿತಿ (State Level Steering Committee) ಯನ್ನು ಮಾನ್ಯ ಉನ್ನತ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ರಾಜ್ಯ ಮಟ್ಟದ ಚಾಲನಾ ಸಮಿತಿ (State Level Steering Committee) ಯು ತಾಂತ್ರಿಕ ಶಿಕ್ಷಣ ಗುಣಮಟ್ಟ ಅಭಿವೃದ್ಧಿ ಯೋಜನೆಯ ಅನುಷ್ಠಾನದ ಬಗ್ಗೆ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದು ಸದರಿ ಸಮಿತಿಯ ತೀರ್ಮಾನಗಳನ್ನು ಸರ್ಕಾರಿ ಆದೇಶದ ಮುಖಾಂತರ ತಪ್ಪದೇ ಜಾರಿಗೊಳಿಸಬೇಕಾಗಿರುತ್ತದೆಂದು ಲೆಕ್ಕಾಧಿಕಾರಿಗಳು ತಿಳಿಸಿದ್ದು ತಾಂತ್ರಿಕ ಶಿಕ್ಷಣ ಗುಣಮಟ್ಟ ಅಭಿವೃದ್ಧಿ ಯೋಜನೆಯು ವಿಶ್ವಬ್ಯಾಂಕ್ ನೆರವಿನ ನಿಗದಿತ ಕಾಲಾವಧಿಯ ಯೋಜನೆಯಾಗಿದ್ದು ಚಾಲನಾ ಸಮಿತಿಯ ನಿರ್ಣಯಗಳಿಗೆ ಸರ್ಕಾರದ ಅನುಮೋದನೆಯನ್ನು ಪಡೆಯುವಲ್ಲಿ ಹೆಚ್ಚಿನ ಸಮಯ ವ್ಯಯವಾಗುವುದರಿಂದ ಕಾರ್ಯಕ್ರಮದ ಪ್ರಗತಿ ಕುಂಠಿತವಾಗುತ್ತದೆಂತಲೂ, ಸದರಿ ರಾಜ್ಯ ಮಟ್ಟದ ಚಾಲನಾ ಸಮಿತಿಯಲ್ಲಿ ಸರ್ಕಾರದ ಪ್ರತಿನಿಧಿಯಾಗಿ ಮಾನ್ಯ ಉನ್ನತ ಶಿಕ್ಷಣ ಸಚಿವರು ಅಧ್ಯಕ್ಷರಾಗಿರುವುದರಿಂದ ಮತ್ತೆ ಸಮಿತಿಯ ತೀರ್ಮಾನಗಳಿಗೆ ಸರ್ಕಾರದ ಅನುಮೋದನೆಯನ್ನು ಪಡೆಯುವುದು ಸಮಂಜಸವೆನಿಸುವುದಿಲ್ಲವೆಂದು ತಿಳಿಸುತ್ತಾ, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ಪ್ರಾಜೆಕ್ಟ್ ಸೀ-ಬರ್ಡ್ (Laq & Reh). ಕಾರವಾರ ಯೋಜನೆಗೆ ಸಂಬಂಧಿಸಿದಂತೆ State Level Co-ordination Committee ಯ ನಿರ್ಣಯಗಳನ್ನು ಸರ್ಕಾರದ ನಿರ್ಣಯಗಳೆಂದು ಪರಿಗಣಿಸಿ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 62 ಆರ್‌ಇಹೆಚ್ 2001 ದಿನಾಂಕ: 25.4.2001 ರಂದು ಹೊರಡಿಸಲಾಗಿದ್ದು, ಅದರಂತೆ ಪ್ರಸ್ತುತ ತಾಂತ್ರಿಕ ಶಿಕ್ಷಣ ಗುಣಮಟ್ಟ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ ರಚಿತವಾಗಿರುವ State Level Steering Committee ಯ ನಿರ್ಣಯಗಳನ್ನು ಸರ್ಕಾರದ

ಆದೇಶಗಳೆಂದು ಅಥವಾ ಸರ್ಕಾರದ ಆದೇಶಕ್ಕೆ ಸಮಾನವೆಂದು ಪರಿಗಣಿಸುವುದರಿಂದ ಯೋಜನೆಯ ಅನುಷ್ಠಾನದ ವೇಗ ಹೆಚ್ಚಿಸಲು ಸಹಕಾರಿಯಾಗುತ್ತದೆಂದು ಈ ಬಗ್ಗೆ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 294 ಟಿಪಿಇ 2005, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2005**

ತಾಂತ್ರಿಕ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ತಾಂತ್ರಿಕ ಶಿಕ್ಷಣ ಗುಣಮಟ್ಟ ಅಭಿವೃದ್ಧಿ ಯೋಜನೆ ಅನುಷ್ಠಾನದ ಬಗ್ಗೆ ರಚಿಸಲಾಗಿರುವ ರಾಜ್ಯ ಮಟ್ಟದ ಸಮನ್ವಯ ಸಮಿತಿಗೆ ಮಾನ್ಯ ಉನ್ನತ ಶಿಕ್ಷಣ ಸಚಿವರು ಅಧ್ಯಕ್ಷರಾಗಿದ್ದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಮತ್ತು ಸರ್ಕಾರದ ಕಾರ್ಯದರ್ಶಿಗಳು (ಬಿ ಅಂಡ್ ಆರ್), ಆರ್ಥಿಕ ಇಲಾಖೆ ರವರುಗಳು ಸದಸ್ಯರಾಗಿರುವುದರಿಂದ ಸದರಿ ಸಮಿತಿಯ ನಿರ್ಣಯಗಳನ್ನು ಸರ್ಕಾರದ ನಿರ್ಣಯಗಳೆಂದು ಪರಿಗಣಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1497

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ ಉತ್ತರ ಕರ್ನಾಟಕ ಆಯುಕ್ತಾಲಯಗಳ ಹುದ್ದೆಗಳನ್ನು 1-4-2005 ರಿಂದ ಒಂದು ವರ್ಷದವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2003 ದಿನಾಂಕ: 10.11.2005.
   (ಇಡಿ 151 ಸ್ಕೀಮರ (ಯೂನಿಕ್) 2003 ದಿನಾಂಕ 10-11-2003)
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯೋಯೋಕಾ 2003 ದಿನಾಂಕ: 12.10.2004.
   (ಇಡಿ 52 ಸ್ಕೀಮರ (ಯೂನಿಕ್) 2004 ದಿನಾಂಕ 12-10-2004)
3. ಸರ್ಕಾರದ ಆದೇಶ ಸಂಖ್ಯೆ: ಇಡಿ 212 ಯೋಯೋಕ 2004 ದಿನಾಂಕ: 6.11.2004.
4. ಅಪರ ಆಯುಕ್ತರು, ಸಾ.ಶಿ.ಇ, ಧಾರವಾಡ ಅವರ ಪತ್ರದ ಸಂಖ್ಯೆ ಸಿ1/ಹುದ್ದೆ ಸ್ಥಳಾಂತರ/22/03-04/5269 ದಿನಾಂಕ: 3.1.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 10.11.2003ರ ಸರ್ಕಾರಿ ಆದೇಶದಲ್ಲಿ 11 ಹುದ್ದೆಗಳನ್ನು ಸೃಜಿಸಲಾಯಿತು. ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ಬೆಂಗಳೂರು ಆಯುಕ್ತಾಲಯದಿಂದ ಉತ್ತರ ಕರ್ನಾಟಕದ ಆಯುಕ್ತಾಲಯಗಳಿಗೆ ಹುದ್ದೆಗಳನ್ನು ವರ್ಗಾಯಿಸಲಾಯಿತು. ಸದರೀ ಹುದ್ದೆಗಳನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 12.10.2004ರ ಸರ್ಕಾರಿ ಆದೇಶದಲ್ಲಿ 1.4.2004ರಿಂದ ಒಂದು ವರ್ಷಗಳ ಅವಧಿಗೆ ಮುಂದುವರಿಸಲಾಯಿತು. ಅನಂತರ ಹುದ್ದೆಗಳ ವರ್ಗಾವಣೆಗಳನ್ನು ಪರಿಷ್ಕರಿಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ: 6.11.2004ರ ಧಾರವಾಡ ಆಯುಕ್ತಾಲಯಕ್ಕೆ 81 ಹುದ್ದೆಗಳನ್ನು ವರ್ಗಾಯಿಸಲಾಯಿತು. ಸದರೀ 81 ಹಾಗೂ 11 ಒಟ್ಟು 92 ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಪರಿಗಣಿಸುವಂತೆ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ: 3.1.2005ರ ತಮ್ಮ ಪತ್ರದಲ್ಲಿ ಕೋರಿದ್ದಾರೆ. ಸದರೀ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸುವ ಕುರಿತು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 48 ಯೋಯೋಕ 2005, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**
**(ಇಡಿ 50 ಸ್ಕೀಮರ (ಯೂನಿಕ್) 2005, ದಿನಾಂಕ: 18ನೇ ಅಕ್ಟೋಬರ್ 2005)**

ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತಾಲಯ, ಧಾರವಾಡ ಈ ವ್ಯಾಪ್ತಿಯಲ್ಲಿರುವ ಕೆಳಕಂಡ ಹುದ್ದೆಗಳನ್ನು 1.4.2005 ರಿಂದ 31.3.2006ರವರೆಗೆ ಮುಂದುವರಿಸುತ್ತದೆ.

ದಿನಾಂಕ: 10.11.2003ರ ಸರ್ಕಾರಿ ಆದೇಶದಲ್ಲಿ ಸೃಜಿಸಲಾದ ಹುದ್ದೆಗಳು:-

| | | |
|---|---|---|
| 1. | ಆಯುಕ್ತರು | 01 ಹುದ್ದೆ |
| 2. | ನಿರ್ದೇಶಕರು | 01 ಹುದ್ದೆ |
| 3. | ಸಹ ನಿರ್ದೇಶಕರು | 01 ಹುದ್ದೆ |
| 4. | ಉಪ ನಿರ್ದೇಶಕರು | 02 ಹುದ್ದೆಗಳು |
| 5. | ಮುಖ್ಯ ಲೆಕ್ಕಾಧಿಕಾರಿಗಳು | 01 ಹುದ್ದೆ |
| 6. | ಸಾರ್ವಜನಿಕ ಸಂಪರ್ಕಾಧಿಕಾರಿ | 01 ಹುದ್ದೆ |
| 7. | ಕಿರಿಯ ಸಂಶೋಧನಾಧಿಕಾರಿ | 01 ಹುದ್ದೆ |
| 8. | ಯೋಜನಾ ಸಹಾಯಕರು | 01 ಹುದ್ದೆ |
| 9. | ಕಲಾಕಾರರು | 01 ಹುದ್ದೆ |
| 10. | ಕಂಪ್ಯೂಟರ್ ಅನಾಲಿಸ್ಟ್ | 01 ಹುದ್ದೆ |
| | **ಒಟ್ಟು** | **11 ಹುದ್ದೆಗಳು** |

ವರ್ಗಾಯಿಸಿದ ಹುದ್ದೆಗಳು:-

| | | |
|---|---|---|
| 1. | ಹಿರಿಯ ಸಹಾಯಕರು | 02 ಹುದ್ದೆಗಳು |
| 2. | ಸಹಾಯಕ ನಿರ್ದೇಶಕರು | 02 ಹುದ್ದೆಗಳು |
| 3. | ಅಧೀಕ್ಷಕರು (ಲೆಕ್ಕಪತ್ರ ಅಧೀಕ್ಷಕರು ಸಹಾಯಕ ಸಾಂಖ್ಯಿಕ ಸೇರಿದಂತೆ) | 08 ಹುದ್ದೆಗಳು |
| 4. | ಪ್ರಥಮ ದರ್ಜೆ ಸಹಾಯಕರು (ಶೀಘ್ರಲಿಪಿಗಾರರು ಸೇರಿದಂತೆ) | 34 ಹುದ್ದೆಗಳು |
| 5. | ದ್ವಿತೀಯ ದರ್ಜೆ ಸಹಾಯಕರು, ಬೆರಳಚ್ಚುಗಾರರು | 25 ಹುದ್ದೆಗಳು |
| 6. | 'ಡಿ' ಗ್ರೂಪ್:ದಲಾಯತ್ | 10 ಹುದ್ದೆಗಳು |
| | **ಒಟ್ಟು** | **81 ಹುದ್ದೆಗಳು** |

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ.ಸಂಖ್ಯೆ ಶಿಇ 141 ಐಎಫ್(ಬಿಎ) 2005 ದಿನಾಂಕ: 1.10.2005 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್. 1498

**ತಿದ್ದುಪಡಿ**

**ಸಂಖ್ಯೆ: ಇಡಿ 02 ಯುಇಸಿ 2002, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005**

ಸರ್ಕಾರದ ಆದೇಶ ಸಂಖ್ಯೆ:ಇಡಿ 118 ಯುಇಸಿ 2000, ದಿನಾಂಕ: 4.6.2001ರ ಆದೇಶ ಭಾಗದಲ್ಲಿ "ಕರ್ನಾಟಕದಲ್ಲಿ ಕನ್ನಡ ಮಾಧ್ಯಮದಲ್ಲಿ 1 ರಿಂದ 10ನೇ ತರಗತಿವರೆಗೆ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ವೃತ್ತಿಪರ ಪದವಿ ಕೋರ್ಸುಗಳಲ್ಲಿ ಶೇಕಡ 5ರಷ್ಟು ಸೀಟುಗಳನ್ನು ಮೀಸಲಿರಿಸಲು ಸರ್ಕಾರವು ನಿರ್ಧರಿಸಿದೆ" ಎಂಬುದನ್ನು ಮಾರ್ಪಡಿಸಿ ಕನ್ನಡ ಮಾಧ್ಯಮದಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳಿಗೆ ವೃತ್ತಿಪರ ಪದವಿ ಕೋರ್ಸುಗಳಲ್ಲಿ ಶೇಕಡ 5 ರಷ್ಟು ಸೀಟುಗಳನ್ನು ಮೀಸಲಿರಿಸಲು ಸರ್ಕಾರವು ನಿರ್ಧರಿಸಿದೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮೇರಿ ಜಾಯ್ಸ್**
ಸರ್ಕಾರದ ಉಪ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)

ಪಿ.ಆರ್. 1499

**ವಿಷಯ:** ಎಂಸಿಟಿಟಿ ಕೋರ್ಸ್‌ಗಳನ್ನು ನಡೆಸಲು ಸರ್ಕಾರದ ಅನುಮತಿ ಕೋರಿ ಸರ್ಕಾರೇತರ ಸಂಸ್ಥೆಗಳು ಸಲ್ಲಿಸಿರುವ ಮನವಿಗಳ ಪರಿಶೀಲನೆ-ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸದಸ್ಯ ಕಾರ್ಯದರ್ಶಿ, ರೀಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾ, ನವದೆಹಲಿ ಅವರ ಪತ್ರದ ಸಂಖ್ಯೆ: 8-3/92-ಆರ್‌ಸಿಐ 7129 ದಿನಾಂಕ:11.7.2005.

**ಪ್ರಸ್ತಾವನೆ:**

ರಾಜ್ಯದಲ್ಲಿ ಸಮನ್ವಯ ಶಿಕ್ಷಣ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ಸಂಪನ್ಮೂಲ ಶಿಕ್ಷಣ ತರಬೇತಿ ನೀಡುವ ಉದ್ದೇಶದಿಂದ ಎಂಸಿಟಿಟಿ ಕೋರ್ಸ್‌ಗಳನ್ನು ನಡೆಸಲು ಸರ್ಕಾರೇತರ ಸಂಸ್ಥೆಗಳಿಗೆ ಅನುಮತಿ ನೀಡಲಾಗುತ್ತಿತ್ತು. ಹಾಗೂ ಒಂದು ವರ್ಷದ ಒಳಗೆ ರೀಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾದ ಮಾನ್ಯತೆಯನ್ನು ಪಡೆಯಬೇಕೆಂಬ ಷರತ್ತು ವಿಧಿಸಲಾಗಿತ್ತು. 1989 ರಿಂದ 2005 ರವರೆಗಿನ ಅವಧಿಯಲ್ಲಿ ಒಟ್ಟು 17 ಸಂಸ್ಥೆಗಳು ಸರ್ಕಾರದ ಅನುಮತಿಯೊಡನೆ ನಡೆಯುತ್ತಿದ್ದವು. ಸದಸ್ಯ ಕಾರ್ಯದರ್ಶಿ, ರೀಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾ, ನವದೆಹಲಿ ಅವರು ಮೇಲೆ ಓದಲಾದ ದಿನಾಂಕ: 11.7.2005ರ ಅವರ ಪತ್ರದಲ್ಲಿ ತರಬೇತಿ ಕೇಂದ್ರಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ, ತರಬೇತಿ ಅವಧಿ ನಿಗದಿಪಡಿಸುವಲ್ಲಿ ಇರುವ ಗೊಂದಲದಿಂದಾಗಿ ಉಂಟಾದ ಅನಿಶ್ಚಿತತೆ ಈ ಸಮಸ್ಯೆಗಳಿಂದಾಗಿ ಕರ್ನಾಟಕದಲ್ಲಿ ಮಾತ್ರ ಸರ್ಕಾರೇತರ ಸಂಸ್ಥೆಗಳಿಂದ ನಡೆಯುತ್ತಿರುವ ಈ ಎಂಸಿಟಿಟಿ ಕೋರ್ಸ್‌ಗಳನ್ನು ಮುಂದುವರೆಸದಿರುವಂತೆ ತಿಳಿಸಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 230 ಯೋಸಕ 2005, ಬೆಂಗಳೂರು, ದಿನಾಂಕ: 6ನೇ ಅಕ್ಟೋಬರ್ 2005**

**(ಇಡಿ 47 ಸ್ಪೀಮರ (ಯೂನಿಕ್) 2005, ದಿನಾಂಕ: 6ನೇ ಅಕ್ಟೋಬರ್ 2005)**

ರಿಹ್ಯಾಬಿಲಿಟೇಶನ್ ಕೌನ್ಸಿಲ್ ಆಫ್ ಇಂಡಿಯಾದ ಮಾನ್ಯತೆ ಪಡೆಯದೇ ಎಂಸಿಟಿಟಿ ಕೋರ್ಸ್‌ಗಳನ್ನು ನಡೆಸುವುದು ಕ್ರಿಮಿನಲ್ ಅಪರಾಧವಾಗುತ್ತದೆ. ಎಂಬ ಅಂಶವನ್ನು ಮನಗಂಡ ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಯಾವುದೇ ಎಂಸಿಟಿಟಿ ಕೋರ್ಸ್‌ಗಳಿಗೆ ಅನುಮತಿ ನೀಡಬಾರದೆಂದು ಈ ಮೂಲಕ ಆದೇಶಿಸುತ್ತದೆ.

ಪ್ರಸ್ತುತ ಈ ಕೋರ್ಸ್‌ಗಳನ್ನು ನಡೆಸುತ್ತಿರುವ ಸರ್ಕಾರೇತರ ಸಂಸ್ಥೆಗಳಿಗೂ ಸಹ ಮುಂದಿನ ಶೈಕ್ಷಣಿಕ ವರ್ಷದಿಂದ ಸದರೀ ಕೋರ್ಸ್‌ಗಳನ್ನು ಮುಚ್ಚತಕ್ಕದ್ದು.

2006ರ ಏಪ್ರಿಲ್ ನಂತರ ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಲಿಯು ಈ ಕೋರ್ಸ್‌ಗಳ ಪರೀಕ್ಷೆ ನಡೆಸುವುದನ್ನು ರದ್ದುಪಡಿಸತಕ್ಕದ್ದು.

ರಿಹ್ಯಾಬಿಲಿಟೇಶನ್ ಕೌನ್ಸಿಲ್ ಆಫ್ ಇಂಡಿಯಾದ ಸೂಚನೆಗಳಂತೆ ಫೌಂಡೇಶನ್ ಕೋರ್ಸ್‌ಗಳನ್ನು ಪ್ರಾರಂಭಿಸಲು ಕರ್ನಾಟಕ ಮುಕ್ತ ವಿಶ್ವವಿದ್ಯಾಲಯವು ಕ್ರಮ ಕೈಗೊಳ್ಳುತ್ತದೆ.

ಪ್ರಸ್ತುತ ಎಂ.ಸಿ.ಟಿ.ಟಿ. ಕೋರ್ಸ್‌ಗಳನ್ನು ನಡೆಸುತ್ತಿರುವ ಸರ್ಕಾರೇತರ ಸಂಸ್ಥೆಗಳು ರಿಹ್ಯಾಬಿಲಿಟೇಷನ್ ಕೌನ್ಸಿಲ್ ಆಫ್ ಇಂಡಿಯಾದ ಸೂಚನೆಗಳಂತೆ ಸಿಂಗಲ್ ಕ್ಯಾಟಗರೀ ಸಂಸ್ಥೆಗಳಾಗಿ ಹಿಯರಿಂಗ್ ಇಂಪೇರ್‌ಮೆಂಟ್, ಮೆಂಟಲ್ ರಿಟಾರ್ಡೇಶನ್, ವಿಷುಯಲ್ ಇಂಪೇರ್‌ಮೆಂಟ್, ಸೆರೆಬ್ರಲ್ ಪಾಲ್ಸಿ ಅಂಡ್ ಆಟಿಸಮ್ ಇವುಗಳ ಪೈಕಿ ಒಂದರ ಕುರಿತು ಕೋರ್ಸ್‌ಗಳನ್ನು ತಮ್ಮಲ್ಲಿರುವ: ಮೂಲ ಸೌಲಭ್ಯಗಳು ಹಾಗೂ ತರಬೇತಿ ಹೊಂದಿದ ಸಮರ್ಥ ಶಿಕ್ಷಕರ ಲಭ್ಯತೆ ಆಧರಿಸಿ ನಡೆಸಬಹುದು.

ಸದರಿ ಸಂಸ್ಥೆಗಳು ರಿಹ್ಯಾಬಿಲಿಟೇಶನ್ ಕೌನ್ಸಿಲ್ ಆಫ್ ಇಂಡಿಯಾದ ನಿಬಂಧನೆಗಳಿಗನುಸಾರವಾಗಿ ಸ್ಪೆಸಿಫಿಕ್ ಡಿಸೇಬಲಿಟಿ ಕ್ಷೇತ್ರದಲ್ಲಿ ವಿಶೇಷ ಶಿಕ್ಷಣ ನೀಡುವ ಡಿಪ್ಲೋಮಾ ಕೋರ್ಸುಗಳಿಗೆ ಮಾನ್ಯತೆ ನೀಡಲು ಕೋರಿ ರಾಜ್ಯ ಸರ್ಕಾರದ ಮೂಲಕ ರಿಹ್ಯಾಬಿಲಿಟೇಶನ್ ಕೌನ್ಸಿಲ್ ಆಫ್ ಇಂಡಿಯಾಗೆ ಅರ್ಜಿ ಸಲ್ಲಿಸಬಹುದು.

ಮೇಲಿನ ಆದೇಶಗಳನ್ನು ಅನುಷ್ಠಾನಗೊಳಿಸಲು ನಿರ್ದೇಶಕರು, ಉರ್ದು ಮತ್ತು ಇತರ ಭಾಷಾ ಅಲ್ಪಸಂಖ್ಯಾತ ಸಂಸ್ಥೆಗಳು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರು ಕ್ರಮಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್. 1500

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2005-06ನೇ ಸಾಲಿನ ತೃತೀಯ ತ್ರೈಮಾಸಿಕ ಕಂತಿನ ಶಾಸನಬದ್ಧ ಅನುದಾನವನ್ನು ರಾಜ್ಯದ ಎಲ್ಲಾ ಗ್ರಾಮಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 237 ಗ್ರಾಪಂಅ 2005, ದಿನಾಂಕ:17.5.2005.
2. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 237 ಗ್ರಾಪಂಅ 2005, ದಿನಾಂಕ:31.8.2005.
3. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 1913:ವೆಚ್ಚ-6:2005, ದಿನಾಂಕ:19.10.2005.

**ಪ್ರಸ್ತಾವನೆ:**

ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ 2005-06ನೇ ಸಾಲಿನ ಶಾಸನಬದ್ದ ಅನುದಾನವನ್ನು ಬಿಡುಗಡೆ ಮಾಡಲು ಲೆಕ್ಕಶೀರ್ಷಿಕೆ "2515-00-198-1-07 (ಯೋಜನೆ)" ಅಡಿಯಲ್ಲಿ ಒದಗಿಸಿರುವ ಒಟ್ಟಾರೆ ಅನುದಾನದ ಬಾಬ್ತಿನಲ್ಲಿ ಪ್ರಥಮ ತ್ರೈಮಾಸಿಕ ಕಂತಿನ (ಏಪ್ರಿಲ್, ಮೇ, ಜೂನ್ ಮಾಹೆಗಳಿಗೆ) ಅನುದಾನದ ಒಟ್ಟು ಮೊತ್ತ ರೂ.70.65 ಕೋಟಿಗಳನ್ನು ಉಲ್ಲೇಖ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುತ್ತದೆ. ಎರಡನೆ ತ್ರೈಮಾಸಿಕ ಕಂತಿನ (ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಗಳಿಗೆ) ಅನುದಾನದ ಮೊತ್ತ 70.65 ಕೋಟಿ ರೂಪಾಯಿಗಳನ್ನು ಉಲ್ಲೇಖ (2)ರಲ್ಲಿ ತಿಳಿಸಿರುವ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ. ಈ ಅನುದಾನವು ಪ್ರತಿ ತ್ರೈಮಾಸಿಕದಲ್ಲಿ ಪ್ರತಿ ಗ್ರಾಮ ಪಂಚಾಯಿತಿಗೆ ರೂ.1,25,000/- ಗಳು ಲಭ್ಯವಾಗಿರುತ್ತದೆ.

ಉಲ್ಲೇಖ (3)ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ರಾಜ್ಯದ ಎಲ್ಲಾ ಗ್ರಾಮ ಪಂಚಾಯ್ತಿಗಳಿಗೆ 2005-06ನೇ ಸಾಲಿನ ಶಾಸನಬದ್ಧ ಅನುದಾನದ ಮೂರನೇ ಕಂತಾಗಿ ಒಟ್ಟು 70.65 ಕೋಟಿ ರೂ.ಗಳನ್ನು ಬಿಡುಗಡೆ ಮಾಡಿರುತ್ತದೆ. ಈ ಮೊತ್ತವನ್ನು 2005-06ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಾಗಿ (ಅಕ್ಟೋಬರ್, ನವೆಂಬರ್ ಮತ್ತು ಡಿಸೆಂಬರ್ ಮಾಹೆಗಳಿಗೆ) ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ತಲಾ ರೂ.1.25 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 237 ಗ್ರಾಪಂಅ 2005, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ 2005-06ನೇ ಸಾಲಿನ ತೃತೀಯ ತ್ರೈಮಾಸಿಕ ಕಂತಿನ ಒಟ್ಟು ರೂ.70.65 ಕೋಟಿಗಳನ್ನು (ರೂ.ಎಪ್ಪತ್ತು ಕೋಟಿ ಅರವತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2515-00-198-1-07 (ಯೋಜನೆ)" ಅಡಿಯಲ್ಲಿ ಭರಿಸತಕ್ಕದ್ದು. ಹಾಗೂ ಈ ಅನುದಾನದ ಮೊತ್ತವನ್ನು ರಾಜ್ಯ ಹುಜೂರ್ ಖಜಾನೆಯಿಂದ ಫೇಯಿಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ರಾಜದೂತ್ ಕಾಂಪ್ಲೆಕ್ಸ್, ಒಂದನೇ ಮಹಡಿ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಪ್ರತಿ ಗ್ರಾಮಪಂಚಾಯತಿಗೆ ರೂ.1.25 ಲಕ್ಷಗಳನ್ನು (ರೂ.ಒಂದು ಲಕ್ಷದ ಇಪ್ಪತ್ತೈದು ಸಾವಿರಗಳು ಮಾತ್ರ) ಗ್ರಾಮ ಪಂಚಾಯತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮೆ ಮಾಡಲು ಆದೇಶಿಸಲಾಗಿದೆ.

ಈಗ ಬಿಡುಗಡೆಯಾದ ಹಣವನ್ನು ಗ್ರಾಮಪಂಚಾಯತಿಗಳು ಸಿದ್ಧಪಡಿಸುವ ಕ್ರಿಯಾ ಯೋಜನೆಯಂತೆ ಸಿದ್ದಪಡಿಸಿದ ಕಾರ್ಯಕ್ರಮಗಳಿಗೆ ಆಯವ್ಯಯದ ಆಧಾರದ ಮೇಲೆ ವೆಚ್ಚ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1913: ವೆಚ್ಚ-6:2005, ದಿನಾಂಕ:19.10.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶಾಮಸುಂದರ**
ಪಿ.ಆರ್. 1501
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## RURAL DEVELOPMENT AND PANCHAYAT RAJ SECRETARIAT

**Sub:** PMGSY - Appointment of Empowered Officer in Karnataka Rural Road Development Agency for PMGSY works.

**Read:**
1. Government Order No. RDP:41:RRC:2003 Dt: 20.10.2004.
2. Government Order No. RDP:135:RRC:2005 Dt: 30.9.2005.

**Preamble:-**

The Chief Engineer, PRED was acting as Empowered Officer for receiving the funds from MORD as per Pradhan Mantri Gram, Sadak Yojana guidelines vide Government Order read at (1) above. A full fledged State Level agency namely, Karnataka Rural Road Development Agency has been established as per Government of India directions vide Government Order read at (2) above. This agency is solely responsible for Operation and Control of PMGSY scheme in the State. As per guidelines, the agency would also appoint an Empowered Officer distinct from Financial Controller. The Officer would be responsible for operational management of the project funds and would need to be a senior officer familiar with project management of Pradhan Mantri Gram Sadak Yojana.

Hence this order.

**Government Order No. RDP:41:RRC:2003, Bangalore, Dated: 10th October 2005**

In the circumstances explained above, Government is pleased to appoint the Chief Operating Officer, Karnataka Rural Road Development Agency (KRRDA) as Empowered Officer in place of Chief

Engineer, Panchayat Raj Engineering Department to operate and maintain Pradhan Mantri Gram Sadak Yojana Bank Account (S.B. Account No:9660 with the Corporation Bank, J.C. Road Branch, Bangalore) of the project funds received from Ministry of Rural Development, Government of India.

The Chief Operating Officer, KRRDA will enter into a tripartite Memorandum of Understanding with the Ministry of Rural Development / NRRDA and the Corporation Bank, Bangalore agreeing to abide by the instructions issued from time to time by the Ministry of Rural Development, Government of India/ NRRDA regarding the operation of the Account.

This fund flow arrangement under the PMGSY will come into effect immediately.

By Order and in the name of the Governor of Karnataka,

P.R. 1502

**B.S. HIREMATH**

Director (RI) & Ex. officio Joint Secretary to Government,
Rural Development and Panchayat Raj Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** PMGSY ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ಅಧಿಕಾರಿ-ಸಿಬ್ಬಂದಿ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ:ಗ್ರಾಅಪ:135:ಆರ್‌ಆರ್‌ಸಿ:05, ದಿನಾಂಕ:30.9.2005.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ನೆರವಿನ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಮಾರ್ಗಸೂಚಿಯಂತೆ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯನ್ನು ಮೇಲೆ ಓದಲಾದ ಸರ್ಕಾರದ ಆದೇಶದ ಮೂಲಕ ಸ್ಥಾಪಿಸಿದೆ. ಸದರಿ ಸಂಸ್ಥೆಯನ್ನು ಕರ್ನಾಟಕ ಸೊಸೈಟಿಗಳ ನೋಂದಣಿ ಅಧಿನಿಯಮ-1960 ರನ್ವಯ ದಿನಾಂಕ:10.10.2005 ರಂದು ನೋಂದಾಯಿಸಲಾಗಿದೆ. ಗ್ರಾಮೀಣ ರಸ್ತೆಗಳ ವಿಷಯವನ್ನು ನಿರ್ವಹಿಸುವ ಇಲಾಖಾ ಕಾರ್ಯದರ್ಶಿಯವರನ್ನು ಪದನಿಮಿತ್ತ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳನ್ನಾಗಿ ನೇಮಿಸಲಾಗಿದೆ. ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಗೆ ಬೇಕಾಗುವ ಸಿಬ್ಬಂದಿ ವರ್ಗದವರನ್ನು ನಿಯೋಜನೆ ಮೇರೆಗೆ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಿಂದ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಪಡೆಯಲು ಸರ್ಕಾರವು ನಿರ್ಧರಿಸಿದೆ.

ಆದಕ್ಕಾಗಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ:135:ಆರ್‌ಆರ್‌ಸಿ:2005, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಗೆ ಬೇಕಾಗುವ ಈ ಕೆಳಗಿನ ಸಿಬ್ಬಂದಿ ವರ್ಗದವರನ್ನು ನಿಯೋಜನೆ ಮೇರೆಗೆ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಮತ್ತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಸ್ಥಳಾಂತರಿಸಿ ಕೆಳಗಿನ ವಿಧಾನದ ಮೂಲಕ ತುಂಬಲು ಸರ್ಕಾರವು ಮಂಜೂರಾತಿಯನ್ನು ನೀಡಿದೆ.

| ಕ್ರ. ಸಂ. | ಹುದ್ದೆ | ತುಂಬುವ ವಿಧಾನ | ಸ್ಥಳಾಂತರಗೊಂಡ ಹುದ್ದೆ |
|---|---|---|---|
| 1. | ಮುಖ್ಯ ಕಾರ್ಯಾಚರಣೆ ಅಧಿಕಾರಿ | ಸರ್ಕಾರದ ಆದೇಶ ಸಂ:ಗ್ರಾಅಪ:241 ಸೇಶಿಕಾ:05, ಬೆಂಗಳೂರು ದಿ:10.10.05ರಲ್ಲಿ ಬಳ್ಳಾರಿ ವೃತ್ತದಿಂದ ಸ್ಥಳಾಂತರಗೊಂಡ ಅಧೀಕ್ಷಕ ಇಂಜಿನಿಯರ್ ಹುದ್ದೆ | ಅಧೀಕ್ಷಕ ಇಂಜಿನಿಯರ್ |
| | **ತಾಂತ್ರಿಕ ವಿಭಾಗ:** | | |
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಮುಖ್ಯ ಇಂಜಿನಿಯರ್ ರವರ ಕಛೇರಿಯಿಂದ ಸ್ಥಳಾಂತರ | ತಾಂತ್ರಿಕ ಸಹಾಯಕರು (ರಸ್ತೆಗಳು) |
| 2. | ಸಹಾಯಕ ಇಂಜಿನಿಯರ್ (4 ಹುದ್ದೆಗಳು) | | ಸಹಾಯಕ ಇಂಜಿನಿಯರ್ (ರಸ್ತೆಗಳು) |
| 3. | ಸಿಸ್ಟಂ ಅನಾಲಿಸಿಸ್ಟ್ | | ಸಹಾಯಕ ಇಂಜಿನಿಯರ್ (IT Nodal Officer) |
| | **ಹಣಕಾಸು ವಿಭಾಗ:** | | |
| 1. | ಮುಖ್ಯ ಲೆಕ್ಕಾಧಿಕಾರಿ | ಜಂಟಿ ನಿಯಂತ್ರಕರ ಹುದ್ದೆ - ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ ಅಥವಾ ಒಪ್ಪಂದದ ಆಧಾರದ ಮೇಲೆ. | ಹೊಸ ಹುದ್ದೆ ಸೃಷ್ಟಿ (ಸರ್ಕಾರಿ ಆದೇಶ ಸಂ:ಗ್ರಾಅಪ:135:ಆರ್‌ಆರ್‌ಸಿ:05 ದಿನಾಂಕ:11.10.2005) |
| 2. | ಲೆಕ್ಕಾಧಿಕಾರಿ | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಮುಖ್ಯ ಇಂಜಿನಿಯರ್‌ರವರ ಕಛೇರಿಯಿಂದ ಸ್ಥಳಾಂತರ | ಲೆಕ್ಕಾಧಿಕಾರಿ |
| 3. | ಲೆಕ್ಕ ಪರಿಶೋಧಕರು (3 ಹುದ್ದೆಗಳು) | | ಲೆಕ್ಕ ಪರಿಶೋಧಕರು (1 ಹುದ್ದೆ) |
| 4. | ಪ್ರಥಮ ದರ್ಜೆ ಸಹಾಯಕರು (2 ಹುದ್ದೆಗಳು) | | ಪ್ರಥಮ ದರ್ಜೆ ಸಹಾಯಕರು |

| ಕ್ರ. ಸಂ. | ಹುದ್ದೆ | ತುಂಬುವ ವಿಧಾನ | ಸ್ಥಳಾಂತರಗೊಂಡ ಹುದ್ದೆ |
|---|---|---|---|
| | **ಗುಣ ನಿಯಂತ್ರಣ ಮತ್ತು ತಪಾಸಣಾ ವಿಭಾಗ:** | | |
| 1. | ಕಾರ್ಯಪಾಲಕ ಇಂಜಿನಿಯರ್ | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಮುಖ್ಯ ಇಂಜಿನಿಯರ್‌ರವರ ಕಚೇರಿಯಿಂದ ಸ್ಥಳಾಂತರ | ಕಾರ್ಯಪಾಲಕ ಇಂಜಿನಿಯರ್ (ರಸ್ತೆಗಳು) |
| 2. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ (2 ಹುದ್ದೆಗಳು) | | 1. ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ರಸ್ತೆಗಳು)<br>2. ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ಗ್ರಾಮೀಣ ನೀರು ಸರಬರಾಜು) |
| 3. | ಸಹಾಯಕ ಇಂಜಿನಿಯರ್ (2 ಹುದ್ದೆಗಳು) | | 1. ಸಹಾಯಕ ಇಂಜಿನಿಯರ್ (ರಸ್ತೆಗಳು)<br>2. ಸಹಾಯಕ ಇಂಜಿನಿಯರ್ (ಗ್ರಾಮೀಣ ನೀರು ಸರಬರಾಜು) |
| | **ಆಡಳಿತ ವಿಭಾಗ:** | | |
| 1. | ಪ್ರಥಮ ದರ್ಜೆ ಸಹಾಯಕರು (2 ಹುದ್ದೆಗಳು) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಸ್ಥಳಾಂತರ. | ಪ್ರಥಮ ದರ್ಜೆ ಸಹಾಯಕರು |
| 2. | ದ್ವಿತೀಯ ದರ್ಜೆ ಸಹಾಯಕರು (2 ಹುದ್ದೆಗಳು) | | ದ್ವಿತೀಯ ದರ್ಜೆ ಸಹಾಯಕರು |

ಮುಖ್ಯ ಲೆಕ್ಕಾಧಿಕಾರಿಯ ಹುದ್ದೆಯೊಂದನ್ನು ಬಿಟ್ಟು ಉಳಿದೆಲ್ಲ ಹುದ್ದೆಗಳನ್ನು ತಕ್ಷಣವೇ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಗೆ (KRRDA) ವರ್ಗಾಯಿಸಿದೆ. 2005-06ನೇ ಸಾಲಿಗೆ ಸದರಿ ಹುದ್ದೆಗಳ ವೇತನವನ್ನು ಈಗಿರುವ ಲೆಕ್ಕ ಶೀರ್ಷಿಕೆಯಡಿಯಲ್ಲಿಯೇ ನೀಡುವುದು. 2006-07ನೇ ಸಾಲಿನಿಂದ ಎಲ್ಲಾ ಹುದ್ದೆಗಳ ವೇತನ ಒಟ್ಟುಗೂಡಿಸಿ KRRDA ಗೆ ಒಂದು ಹೊಸ ಲೆಕ್ಕ ಶೀರ್ಷಿಕೆಯನ್ನು ಆರ್ಥಿಕ ಇಲಾಖೆಯಿಂದ ಪಡೆದು ಅನುದಾನದ ಅವಕಾಶ ಮಾಡಿಕೊಳ್ಳುವುದು. ಹೊಸದಾಗಿ ಸೃಷ್ಟಿಸಿದ ಮುಖ್ಯ ಲೆಕ್ಕಾಧಿಕಾರಿಗಳ ವೇತನವನ್ನು ಸಂಸ್ಥೆಯ (KRRDA) ನಿಧಿ/ಅನುದಾನದಿಂದ ಭರಿಸುವುದು. ಆಡಳಿತಾತ್ಮಕ, ಪ್ರಯಾಣ ವೆಚ್ಚ, ಇತ್ಯಾದಿಗಳನ್ನು PMGSY ಮಾರ್ಗಸೂಚಿಯಂತೆ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:FD/918/Esp-6/2005 ದಿನಾಂಕ:25.5.2005ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಹಿರೇಮಠ**

ಪಿ.ಆರ್. 1503

ನಿರ್ದೇಶಕರು,

ಗ್ರಾಮೀಣ ಮೂಲಭೂತ ಸೌಲಭ್ಯಗಳು ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** PMGSY ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಲ್ಲಿ ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ:ಗ್ರಾಅಪ:135:ಆರ್‌ಆರ್‌ಸಿ:05, ದಿನಾಂಕ:30.9.2005.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ನೆರವಿನ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಮಾರ್ಗಸೂಚಿಯಂತೆ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯನ್ನು ಮೇಲೆ ಓದಲಾದ ಸರ್ಕಾರದ ಆದೇಶದ ಮೂಲಕ ಸ್ಥಾಪಿಸಿದೆ. ಸದರಿ ಸಂಸ್ಥೆಯನ್ನು ಕರ್ನಾಟಕ ಸೊಸೈಟಿಗಳ ನೋಂದಣಿ ಅಧಿನಿಯಮ-1960 ರನ್ವಯ ದಿನಾಂಕ:10.10.2005 ರಂದು ನೋಂದಾಯಿಸಲಾಗಿದೆ. ಸದರಿ ಸಂಸ್ಥೆಗೆ ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಯ ಅವಶ್ಯಕತೆಯಿದ್ದು ಸರ್ಕಾರವು ರಾಜ್ಯ ಲೆಕ್ಕಪತ್ರ ಇಲಾಖೆಯ ಜಂಟಿ ನಿಯಂತ್ರಕರ ಹುದ್ದೆಗೆ ಸಮಾನವಾದ ಹುದ್ದೆಯನ್ನು ಸೃಜಿಸಲು ನಿರ್ಧರಿಸಿದೆ.

ಅದಕ್ಕಾಗಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ:135:ಆರ್‌ಆರ್‌ಸಿ:2005, ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯಲ್ಲಿ ಹಣಕಾಸು ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಲು ರಾಜ್ಯ ಲೆಕ್ಕ ಪತ್ರ ಇಲಾಖೆಯ ಜಂಟಿ ನಿಯಂತ್ರಕರ ಹುದ್ದೆಗೆ ಸಮಾನವಾದ ಮುಖ್ಯ ಲೆಕ್ಕಾಧಿಕಾರಿಗಳ ಹುದ್ದೆಯನ್ನು ಸೃಜಿಸಲು ಸರ್ಕಾರವು ಹರ್ಷಿಸುತ್ತದೆ. ಸದರಿ ಹುದ್ದೆಯನ್ನು ನಿಯೋಜನೆ ಮೇರೆಗೆ ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ತುಂಬುವುದು. ಮುಖ್ಯ ಲೆಕ್ಕಾಧಿಕಾರಿಗಳ ವೇತನವನ್ನು ಸಂಸ್ಥೆಯ (KRRDA) ನಿಧಿ/ಅನುದಾನದಿಂದ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: FD/918/Esp-6/2005 ದಿನಾಂಕ:25.5.2005ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಹಿರೇಮಠ**

ಪಿ.ಆರ್. 1504

ನಿರ್ದೇಶಕರು,

ಗ್ರಾಮೀಣ ಮೂಲಭೂತ ಸೌಲಭ್ಯಗಳು ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.